# ನೂರು ಪುಟಾಣಿ

ಜಿ. ಪಿ. ರಾಜರತ್ನಂ

‘ ಶಾಕ್ಯಮಂಟಪ ’
ಮಲ್ಲೇಶ್ವರ, ಬೆಂಗಳೂರು

೧೯೪೦

# ನೂರು ಪುಟಾಣಿ

ಜಿ ಪಿ ರಾಜರತ್ನಂ
'ಶಾಕ್ಯಮಂಟಪ', ಮಲ್ಲೇಶ್ವರ, ಬೆಂಗಳೂರು

[ಎಲ್ಲ ಹಕ್ಕುಗಳನ್ನು ಕಾದಿರಿಸಿದೆ]

ಬಿ. ಬಿ ಡಿ. ಪವರ್ ಪ್ರೆಸ್, ಅರಳೆಪೇಟೆ, ಬೆಂಗಳೂರು ಸಿಟಿ.

೧೯೪೦

[ನಾಲ್ಕು ಆಣೆ

" ವಿಗಡ ವಿಕ್ರಮರಾಯ "
" ವಿಜಯ ನಾರಸಿಂಹ ", " ಬಿರುದಂತೆಂಬರ ಗಂಡ "
" ಮಂತ್ರಶಕ್ತಿ ", " ಸುಗುಣ ಗಂಭೀರ ", " ಬೆಟ್ಟದರಸು "
ಮುಂತಾದ ಹಲವಾರು ನಾಟಕಗಳನ್ನೂ

" ಸಂಸಪದಂ "
" ಈಶಪ್ರಕೋಪನಂ ", " ನರಕ ದುರ್ಯೋಧನೀಯಂ ", " ಅಚ್ಚುಂಬಶತಕಂ "
ಮುಂತಾದ ಹಲವಾರು ಕಾವ್ಯಗಳನ್ನೂ

ರಚಿಸಿದ

**ಅಸ್ತಂಗತ " ಸಂಸ " ಅವರಿಗೆ**

**ಅವರ ನೆನಪಿಗೆ**

**ಅರ್ಪಣೆ**

# ಬಿನ್ನಹ

ಪುರಂದರ ದಾಸರು ಒಂದು ದಿನ ಎಂದಿನಂತೆ ಹರಿನಾಮ ಕೀರ್ತನೆ ಮಾಡುತ್ತ ಭಿಕ್ಷೆಗೆ ಹೊರಟರಂತೆ ದಿನವೆಲ್ಲ ತಿರುಗಿದರು ಭಿಕ್ಷೆ ಹುಟ್ಟಲಿಲ್ಲವಂತೆ. ಬರಿಗೈಯಲ್ಲಿ ಮನೆಗೆ ಬಂದರಂತೆ ತನಗೆ ಹೊರಗೆ ಭಿಕ್ಷೆ ದೊರಕದಿದ್ದರೂ ತಾನು ದೇವರಿಗೆ ಭಿಕ್ಷೆ ಸಲಿಸದಿರುವಂತಿಲ್ಲವಲ್ಲ ಆಗ ದಾಸರು ದೇವರೊಡನೆ ಹೀಗೆ ಸರಸವಾಡಿದರಂತೆ:

ಆರು ಬದುಕಿದರಯ್ಯ ಹರಿ ನಿನ್ನ ನಂಬಿ
ತೋರು ಈ ಜಗದೊಳಗೆ ಒಬ್ಬರನು ಕಾಣೆ

ಕಲಹಬಾರದ ಹಾಗೆ ಕರ್ಣನನು ನೀ ಕೊಂದೆ
ಸುಲಭದಲಿ ಕೌರವನ ಮನೆಯ ಮುರಿದೆ
ನೆಲವ ಬೇಡುತ ಪೋಗಿ ಬಲಿಯ ತನುವನು ತುಳಿದೆ
ಮೊಲೆಯನುಣಿಸಲು ಬಂದ ಪೂತನಿಯ ಕೊಂದೆ

ತಿರಿದುಂಬ ದಾಸರ ಕೈಲಿ ಕಪ್ಪವ ಕೊಂಬೆ
ಗರುಡವಾಹನ ನಿನ್ನ ಚರಿಯವರಿಯೆ
ದೊರೆ ಪುರಂದರ ವಿಠಲ ನಿನ್ನ ನಂಬಿದರೆ
ತಿರುಪೆಯು ಹುಟ್ಟಲೊಲ್ಲದು ಕೇಳೊ ಹರಿಯೆ

ಇನ್ನೊಮ್ಮೆ ಒಬ್ಬ ಆಷಾಢಭೂತಿಯ ಬೂಟಾಟಿಕೆಯನ್ನು ಕಂಡು ಹೀಗೆಂದರಂತೆ:

ಕಂಚುಗಾರರ ಬಿಡಾರದಂದದಲಿ
ಕಂಚು ಹಿತ್ತಾಳೆ ಪ್ರತಿಮೆ ನೆರಹಿ
ಮಿಂಚಲೆನುತ ಬಹು ಜ್ಯೋತಿಗಳನೆ ಹಚ್ಚಿ
ವಂಚನೆಯಲಿ ಘನ ಪೂಜೆಮಾಡುವುದು

ಉದರ ವೈರಾಗ್ಯವಿದು ನಮ್ಮ
ಪದುಮನಾಭನಲಿ ಲೇಶ ಭಕುತಿಯಿಲ್ಲ

ಇನ್ನೊಂದು ಸಲ 'ಶಿವೋಽಹಂ ಶಿವೋಽಹಂ' ಎನ್ನುತ್ತಿದ್ದವನನ್ನು ಹೀಗೆ ಚೇಷ್ಟೆ ಮಾಡಿದರಂತೆ:

ಶಿವ ನೀ ಹೇಗಾದ್ಯೊ ತಾಯಿಗಂಡ ಹರ ನೀ ಹೇಗಾದ್ಯೊ
ಶಿವ ನೀನಾದರೆ ಶಿವನರ್ಧಾಂಗಿಗೆ ಧವನಾಗಬೇಕಲ್ಲೊ।
ಅವಿವೇಕಿ ಮೂಢ॥

ಗಂಗೆಯ ಶಿರದಲ್ಲಿ ಧರಿಸಿದ ನಮ್ಮ ಶಿವ
ಕುಂಭವ ಹೊರದೇ ಬಡಕೊಂಬೆ ಖೋಡಿ

ಕಾಳಕೂಟ ವಿಷ ಧರಿಸಿದ ನಮ್ಮ ಶಿವ
ಚೇಳು ಕಡಿದರೆ ಹೊಡಕೊಂಬೆ ಖೋಡಿ

ಹೀಗೆಯೆ ಅನೇಕ ದಾಸರು ಅನೇಕ ಸಂದರ್ಭಗಳಲ್ಲಿ ಆಯಾ ಸನ್ನಿವೇಶಗಳಿಂದ ಪ್ರೇರಿತರಾಗಿ ಅಲ್ಲಲ್ಲಿಗೆ ಯುಕ್ತವಾದ ಮಾತುಗಳನ್ನು ತಮ್ಮ ಪದಗಳಲ್ಲಿ ಆಡಿದ್ದಾರೆ ಇವುಗಳು ದೀರ್ಘಾಲೋಚನೆಯಿಂದ ಹೊಸೆದ ಸರ್ಗ ಆಶ್ವಾಸ ಬಂಧಗಳ ಕೃತಿಗಳಲ್ಲ. ಆಯಾ ಸಮಯಸ್ಫೂರ್ತಿಯಿಂದ ಸೃಷ್ಟಿಯಾದುವು. ಪ್ರತಿಯೊಂದೂ ಒಂದೊಂದು ' ಬಿಡಿ ಪದ್ಯ '.

ನಮ್ಮ ಶಿವಶರಣರ ವಚನಗಳಾದರೂ ಈ ಜಾತಿಯವೆ, ಇವುಗಳಂತೇ ಸೃಷ್ಟಿಯಾದವೆ. ನಮ್ಮ ಬಸವಣ್ಣನವರ ಕೆಲವು ವಚನ ನೋಡಿ:

ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವರ ಮನೆಯಲು ಕಿಚ್ಚೆದ್ದು ಸುಡುವಾಗ ಬಚ್ಚಲನೀರ ಬೀದಿಯ ದೂಳವ ಹೊಯ್ದು ಬೊಬ್ಬಿಟ್ಟೆಲ್ಲರ ಕರೆವರಯ್ಯ. ಕೂಡಲಸಂಗಮದೇವ, ವಂದನೆಯ ಮರೆತು ನಿಂದಿಸುತಿರ್ದರಯ್ಯಾ.

ಹಬ್ಬಕ್ಕೆ ತಂದ ಹರಕೆಯ ಕುರಿ ತೋರಣಕ್ಕೆ ತಂದ ತಳಿರ ಮೇಯಿತ್ತು. ಕೊಂದಹರೆಂಬುದನರಿಯದೆ, ಬೆಂದೊಡಲ ಹೊರೆವುತ್ತಲಿದೆ. ಅಂದಂದೆ ಹುಟ್ಟಿತ್ತು, ಅಂದಂದೆ ಹೊಂದಿತ್ತು, ಕೊಂದವರುಳಿದರೆ ಕೂಡಲಸಂಗಮದೇವಾ.

ಹಾದರಕ್ಕೆ ಹೋದರೆ ಕಳ್ಳ ದಮ್ಮವಾಯಿತ್ತು. ಹಾಳು ಗೋಡೆಗೆ ಹೋದರೆ ಚೇಳೂರಿತ್ತು. ಅಬ್ಬರವ ಕೇಳಿ ತಳವಾರನುಟ್ಟ ಸೀರೆಯ ಸುಲಿದ. ನಾಚಿ ಹೋದರೆ ಮನೆಯ ಗಂಡ ಬೆನ್ನ ಬಾರನೆತ್ತಿದ. ಅರಸು ಕೂಡಲಸಂಗಮದೇವ ದಂಡವ ಕೊಂಡ.

ಮಾತಿನ ಮಾತಿಂಗೆ ನಿನ್ನ ಕೊಂದಾರೆಂದು, ಎಲೆ ಹೋತೇ, ಅಳು ಕಂಡೆಯಾ. ವೇದವನೋದಿದವರ ಮುಂದೆ, ಅಳು ಕಂಡೆಯಾ,

ಹೋತೆ. ಶಾಸ್ತ್ರವ ಕೇಳಿದವರ ಮುಂದೆ, ಅಳು ಕಂಡೆಯಾ.
ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವ.

ಈ ವಚನಗಳನ್ನಾಗಲಿ, ಇತರ ಶಿವಶರಣರ ಯಾವ ವಚನಗಳನ್ನಾಗಲಿ, ಸಮಾಜಕ್ಕೆ ಹೇಳಿದ ವಚನದಿಂದ ಹಿಡಿದು ಅನುಭವದ ವಚನದವರೆಗೆ ಯಾವುದೇ ಆಗಲಿ ಓದಿದರೆ—ಆ ವಚನ ಉದ್ಭವಿಸಿದ ಸನ್ನಿವೇಶವನ್ನು ಕಲ್ಪಿಸುವುದು ಕಷ್ಟವಾಗದು. ಇಲ್ಲಿ ಕೂಡ ಪ್ರತಿ ವಚನವೂ ಬಿಡಿ ಬಿಡಿ, ತನ್ನಲ್ಲಿ ತಾನು ಪೂರ್ಣವಾಗಿದೆ

ಅಂದು ಕಾಮನ ಹರನು ಕೊಂದನೆಂಬುದು ಹುಸಿ
ಇಂದುವದನೆಯರ ಕಡೆಗಣ್ಣ ನೋಟದಲಿ
ನಿಂದಿಹನು ಸ್ಮರನು ಸರ್ವಜ್ಞ

ಬಂಧುಬಳಗವು ಕೂಡಿ ಹೊಂದಿ ಜೋಗುಳ ಹಾಡಿ
ಹಿಂದೆ ಸತ್ತವರ ಹೆಸರಿಟ್ಟು ಗುಗ್ಗುರಿಯು
ತಿಂದು ತೂಗುವರು ಸರ್ವಜ್ಞ

ಒಂದಾಡ ತಿಂಬಾತ ಹೊಂದಿದಡೆ ಸ್ವರ್ಗವನು
ಎಂದೆಂದು ಆಜನ ಕಡಿತಿಂಬ ಕಟಿಗ ತಾ
ನಿಂದ್ರನೇಕಾಗ ಸರ್ವಜ್ಞ

ಅಳು ಸೂಳೆ ನಾಯಿ ಕೋಳಿ ಜೋಯಿಸ ವೈದ್ಯ
ಗೂಳಿಯೂ ತಗರು—ಪ್ರತಿರೂಪ ಕಂಡೊಡನೆ
ಕಾಳಗವು ಎಂದ ಸರ್ವಜ್ಞ

ಎಂಬ ಮೊದಲಾದ ಸರ್ವಜ್ಞನ ವಚನಗಳಾದರೂ ಬಿಡಿ ಬಿಡಿಯಾದವು, ಸ್ವಯಂಪೂರ್ಣವಾದವು ನಮ್ಮ ಜನಪದ ಸಾಹಿತ್ಯ, ಹಳ್ಳಿಯ ಪದಗಳು, ಕೂಡ ಇಂಥವೆ. ಸೋಮೇಶ್ವರ ಶತಕ, ಪಂಪಾಶತಕ, ರತ್ನಾಕರ ಶತಕ ಮೊದಲಾದ ಹಲವು ಶತಕಗಳಾದರೂ ಬಿಡಿ ಬಿಡಿ ವೃತ್ತಗಳ ಮಾಲೆಗಳೆ. ಸುಗುಣರತ್ನಕರಂಡಾ, ಚೂಡಾರತ್ನಾ, ಕನ್ನಡಜಾಣಾ ಮುಂತಾದ ಅಂಕಿತಗಳಲ್ಲಿ ದೊರಕುವ ಕಂದಗಳಾದರೂ ಈ ಗುಂಪಿಗೆ ಸೇರಿದವೆ. ನಮ್ಮ ಬ್ರಹ್ಮಶಿವನ 'ಸಮಯ ಪರೀಕ್ಷೆ' ಆಶ್ವಾಸಬಂಧದ ಕಾವ್ಯವಾದರೂ ಅದರೊಳಗಣ ಹಲವು ಪದ್ಯಗಳು ಸ್ವತಂತ್ರವಾಗಿ ಇರಬಲ್ಲುವು. ಒಂದೆರಡು ಉದಾಹರಣೆ ನೋಡಿ :

ಬಗೆವೊಡದೇನಾನುಂ ಬಾ
ೞ್ತಿಗಲ್ಲವೆನಿಪರಳಿಗೊಲ್ದು ಪೊಡೆವಡುವವನಾ
ಚಿಗುರುಂ ಪೂವುಂ ಕಾಯುಂ
ಸೊಗಯಿಪ ಮಾವಿಂಗೆ ಪುಣಿಸೆಗೆಱಗಲ್ವೇಡಾ

ಮರುಳರಸಂಗೆ ಮಲ್ಲಿಗೆಯು ಮೊಲ್ಲೆಯು ಜಾದಿಯು ಕಂಪನಾಳ್ದ ಸುಂ
ದರ ಕುಸುಮಂಗಳಂ ಕುಡದ ಕಾರಣಮಾವುದೊ ಬನ್ನಿಯೆರ್ಕೆಯು
ತ್ತರಣೆಯು ಜೆಲ್ಲಿಪತ್ತದ ತೊಳಂಚಿಯು ಪತ್ರಿಯನೊಂದನಿತ್ತು ಚೆ
ಚ್ಚರಮಮರತ್ವಮಂ ಪಡೆದೆನೆಂಬರದರ್ಕೆ ನಿಮಿತ್ತಮಾವುದೋ

ಒರ್ಮನಂಗಱಿವಾವಿಂ
ಗೊರ್ಮಯುಮೆಱಗುತ್ತುಮಿರದೆ ಕೊಡವಾಲ್ಗಱಿವೊಂ
ದೆರ್ಮಗೆಱಗಿದೊಡೆ ಪಶುವಿಂ
ನೂರ್ಮಡಿ ಫಲಮೀವುದದಱನೆಱಗುಗೆ ಭಕ್ತಂ

ಒಡಲೊರ್ವಾಗಮನಿತ್ತಂ
ಗಡ ಕಾಂತೆಗೆ ಶಂಭು ಶಂಭುಗಂ ಕೊಟ್ಟಳ್ ತ
ನ್ನೊಡಲೊರ್ವಾಗಮನಗಸುತೆ
ಗಡ ಮಿಕ್ಕರಡರೆಯನಾರ್ಗೆ ಕೊಟ್ಟರೊ ಪೇೞಿಂ

ಇದು ಯುಕ್ತಮಪ್ಪುದಲ್ಲೆ
ನ್ನದೋತಿ ತಲೆಮೇಲೆ ಬೀಳೆ ಬೋಳಿಸರಾ ಅಂ
ದದ ಬುದ್ಧಿಮಂತರಂತದು
ತುದಿಮೂಗಿನ ಮೇಲೆ ಬೀಳ್ವೊಡದನೇಗೆಯ್ವರ್

ನಮ್ಮ ಕನ್ನಡ ಕಾವ್ಯಗಳ ಆರಂಭದಲ್ಲಿ ಬರುವ ಅನೇಕ ಪದ್ಯಗಳೂ ಈ ಬಿಡಿ ಬಿಡಿ ಜಾತಿಗೆ ಸೇರಿದುವೆ ಅವುಗಳನ್ನೆಲ್ಲ ಆಯಾ ಕವಿಗಳೆ ಬರೆದರೆಂದು ಸ್ವೀಕರಿಸುವುದು ಅಷ್ಟು ಸರಿಯಾಗಿ ಕಾಣುವುದಿಲ್ಲ ಕವಿಗಳು ಬರೆದುದೂ ಹಲವು ಉಂಟು. ಅದರ ಜೊತೆಗೆ ಕವಿಯನ್ನು ಕುರಿತು ಅಭಿಮಾನಿಗಳು ಆಡಿದ ಹಲವು ಬಿಡಿಮಾತುಗಳೂ ಸೇರಿಕೊಂಡಿರುವುದೂ ಉಂಟು. ಉದಾಹರಣೆಗೆ ಪೊನ್ನನ ಶಾಂತಿಪುರಾಣದಲ್ಲಿ ಈ ಒಂದು ಪದ್ಯ ಸಿಕ್ಕುತ್ತದೆ:

ಸಂದ ಗತಪ್ರತ್ಯಾಗತ
ವೊಂದೀ ಕೃತಿಯೊಂದಿವಕ್ಕೆ ಗೆಲ್ಗುಂ ನೀಂ ಪೇ

ಟಿರ್ಡ್ಡೊಂದೆರಡು ಮುಕ್ತಕಂ ಪೆಜಿ
ರೊಂದೊಂದಧ್ವಾನಮೇಂ ಕುರುಳ್ಗಳ ಸವಣಾ

ಈ ಪದ್ಯದಿಂದ ಎರಡು ವಿಷಯ ತಿಳಿಯುತ್ತದೆ: ಒಂದು, ಕವಿಯು ಕಾವ್ಯದಲ್ಲಿ ಇತರರ ಪದ್ಯಗಳೂ ಸೇರಿಕೊಂಡಿವೆಯೆಂಬುದು; ಎರಡನೆಯದು, ಇಲ್ಲಿ ನಮಗೆ ಪ್ರಕೃತವಾದುದು, ನಮ್ಮ ಮಹಾಕವಿಗಳು ಕೂಡ '**ಮುಕ್ತಕ**'ಗಳನ್ನು ಮಾಡುತ್ತಿದ್ದರೆಂಬುದು.

'**ಮುಕ್ತಕ**' ಎಂಬ ಹೆಸರಾಗಲಿ, 'ಮುಕ್ತಕ'ವೆಂಬ ಸಾಹಿತ್ಯವಾಗಲಿ, ಸಂಸ್ಕೃತ ಬಲ್ಲವರಿಗೇನೂ ಹೊಸದಲ್ಲ ಸಂಸ್ಕೃತ ಅಷ್ಟು ಪರಿಚಯವಲ್ಲದಿದ್ದರೂ, ಕನ್ನಡದಲ್ಲಿ ಶ್ರೀಮಾನ್ ತೀ ನಂ ಶ್ರೀಕಂಠಯ್ಯನವರ 'ಒಲುಮೆ' ಕವನಸಂಗ್ರಹವನ್ನು ತಿಳಿದವರಿಗಾದರೂ 'ಮುಕ್ತಕ' ಹೊಸದಲ್ಲ. ಆ ಪುಸ್ತಕದ ಮುನ್ನುಡಿಯ ಮೂರು ಮಾತುಗಳನ್ನು ಇಲ್ಲಿ ಕೊಡುವುದು ಅಪ್ರಕೃತವಾಗಲಾರದು :

> "ಈ ಬಿಡಿಪದ್ಯಗಳಲ್ಲಿ — 'ಮುಕ್ತಕ'ಗಳಲ್ಲಿ — ಒಂದೊಂದೂ ಪೂರ್ಣಕಾವ್ಯ ಅವಕಾಶವು ಇಷ್ಟು ಕಿರಿದಾಗಿದ್ದರೂ ಅದು ಒಂದು ಸಮಗ್ರಭಾವವನ್ನು ಚಿತ್ರಿಸುತ್ತದೆ ಅದರ ಸವಿಯನ್ನೆಲ್ಲಾ ಆಸ್ವಾದಿಸಬೇಕಾದರ, ಕವಿಯ ಕಲ್ಪನೆಯೊಂದಿಗೆ ನಮ್ಮ ಕಲ್ಪನೆಯನ್ನೂ ಹಾರಬಿಟ್ಟು, ಚಿತ್ರದ ಸುತ್ತಲೂ ಒಂದು ಉಚಿತವಾದ ಆವರಣವನ್ನು ರಚಿಸಿಕೊಂಡು, ಅದರ ಪ್ರಭೆಯನ್ನು ಕವಿಯ ಮಾತುಗಳ ಮೇಲೆ ಬೀರಬೇಕು. ಆಗ ನಮಗೆ ಈ 'ದಂತದ ಮೇಲಿನ ಚಿತ್ರಗೆಲಸ'ದ ಅಪೂರ್ವ ಸತ್ತ್ವವು ಮುಂದಟ್ಟಾಗುತ್ತದೆ; ಅಮರುಕನಂಥ ಕವಿಗೆ ಸಂಸ್ಕೃತ ಸಾಹಿತ್ಯದಲ್ಲಿರುವ ಪ್ರಶಸ್ತಿ* ಅರ್ಥವಾಗುತ್ತದೆ".

ಹೀಗೆ, ಒಂದೇ ಪದ್ಯದಲ್ಲಿ ಮುಗಿದು ಪೂರ್ಣವಾದುದಕ್ಕೆ 'ಮುಕ್ತಕ'ವೆಂದೂ, ಒಂದಕ್ಕಿಂತ ಹೆಚ್ಚಾದ ಪದ್ಯಗಳಲ್ಲಿ ಮುಗಿದರೆ ಅವಕ್ಕೆ 'ಕುಳಕ', 'ಮಾಲೆ' ಎಂದೂ ಮೊದಲಾಗಿ ಹೆಸರಿಡುವರಂತೆ. ಆದರೆ ಒಂದೇ ಪದ್ಯದಲ್ಲಾಗಲಿ, ಹಲವು ಪದ್ಯಗಳಲ್ಲಾಗಲಿ—ಸರ್ಗ ಆಶ್ವಾಸಬಂಧಗಳಿಲ್ಲದೆ—ಮುಗಿದರೆ ಅದನ್ನು ಸಾಮಾನ್ಯವಾಗಿ "**ಚಾಟು**"

---

*'ಅಮರುಕ ಕವೇರೇಕಃ ಶ್ಲೋಕಃ ಪ್ರಬಂಧಶತಾಯತೇ'

ಎನ್ನುವರಂತೆ, ಸಂಸ್ಕೃತದಲ್ಲಿ. ಈ ಜಾತಿಯ ಸಾಹಿತ್ಯ ಸಂಸ್ಕೃತ ಒಂದಕ್ಕೇ ಮೀಸಲಲ್ಲ; ಗ್ರೀಕ್, ಲ್ಯಾಟಿನ್, ಇಂಗ್ಲಿಷ್, ಜರ್ಮನ್, ಫ್ರೆಂಚ್ ಮುಂತಾದ ಅನ್ಯಭಾಷೆಗಳಲ್ಲೂ ಸಿಕ್ಕುತ್ತದೆ. ಅದನ್ನು ಅವರು **'ಎಪಿಗ್ರಂ'** ಎನ್ನುವರಂತೆ. ಕನ್ನಡದಲ್ಲಿ ಕೂಡ, ಹಿಂದೆ ಇಂಥವು ಇರಲಿಲ್ಲವೆಂದಲ್ಲ; ಅವಕ್ಕೆ ನಮ್ಮವರು ಒಂದು ವಿಶಿಷ್ಟವಾದ ಹೆಸರು ಕೊಡಲಿಲ್ಲ, ಅಷ್ಟೆ. ಈಗಿನ ಹೊಸ ಸಾಹಿತ್ಯದಲ್ಲಾದರೂ ಈ ಜಾತಿಯಿಲ್ಲದೆ ಹೋಗಿಲ್ಲ; ಈಗಲಾದರೂ ಅದಕ್ಕೊಂದು ಹೆಸರು ಇಟ್ಟು ಕರೆದಿಲ್ಲ, ಅಷ್ಟೆ.

ಈ ಪುಸ್ತಕದಲ್ಲಿ 'ಚಾಟು', 'ಎಪಿಗ್ರಂ' ಜಾತಿಯ ಒಂದು ನೂರು 'ಮುಕ್ತಕ'ಗಳು ಇವೆ. ಇದರ ಚಿಕ್ಕ ಮೂರ್ತಿಗಾಗಿ ನಾನು ಇದನ್ನು '**ಪುಟಾಣಿ**' ಎಂದು ಕರೆದಿದ್ದೇನೆ. ಚಾಟುವಿಗೆ ಇಂಥದೇ ಭಾವ, ಇಂಥದೇ ರಸ ಇರಬೇಕೆಂಬ ಕಟ್ಟಿಲ್ಲ. ಸ್ವರೂಪ ಸಣ್ಣದಾಗಿರಬೇಕು, ಹೇಳುವ ರೀತಿಯಲ್ಲಿ ಚಮತ್ಕಾರವಿರಬೇಕು, ಧ್ವನಿ ತುಂಬಿರಬೇಕು, ಇಷ್ಟೆ. ಸಂಸ್ಕೃತದಲ್ಲಿನ ಶೃಂಗಾರಯುತವಾದವುಗಳನ್ನು 'ಒಲವು' ಸಂಗ್ರಹದಲ್ಲಿ ಓದಿ ಆನಂದಪಡಬೇಕು; ಇತರ ರಸಗಳ ಹಲವು ಮಾದರಿಗಳನ್ನು ಇಲ್ಲಿ ಕಾಣಬಹುದು; ಕನ್ನಡದ ಕೆಲವನ್ನೂ ಅನ್ಯಭಾಷೆಗಳಿಂದ ತಂದ ಹಲವನ್ನೂ ಇಲ್ಲಿ ಪಡೆಯಬಹುದು. ಕಡೆಯಲ್ಲಿ ನನ್ನವೇ ಕೆಲವನ್ನು ಇಲ್ಲಿ ಕೂಡಿಸಿದ್ದರೆ, ಅವು ಮಿಕ್ಕವುಗಳ ಸಮಕ್ಕೆ ಎದ್ದು ನಿಲ್ಲುವುವು ಎಂಬ ಭಾವನೆಯಿಂದಲ್ಲ; ಸ್ನೇಹಿತರು ಕೆಲವರು ಸಂತೋಷಗೊಂಡಿರುವ ಅವುಗಳಿಂದ ಇನ್ನೂ ಹತ್ತು ಜನಕ್ಕೆ ಸಂತೋಷವಾದೀತೇನೋ ಎಂಬ ಆಸೆಯಿಂದ. ಈ ಆಸೆ ಇಲ್ಲಿಯ ಇಡೀ ನೂರು "ಪುಟಾಣಿ"ಗಳಿಗೂ ಅನ್ವಯಿಸುತ್ತದೆ. ಈ ಆಸೆ ನೆರವೇರಿದರೆ ನಾನು ಕೃತಾರ್ಥ.

'ಶಾಕ್ಯಮಂಟಪ'
ಮಲ್ಲೇಶ್ವರ, ಬೆಂಗಳೂರು.

**ಜಿ. ಪಿ. ರಾಜರತ್ನಂ**

# ನೂರು ಪುಟಾಣಿ

“ ಈ ಬಿಡಿಪದ್ಯಗಳಲ್ಲಿ—‘ ಮುಕ್ತಕ ’ಗಳಲ್ಲಿ—ಒಂದೊಂದೂ ಪೂರ್ಣಕಾವ್ಯ. ಅವಕಾಶವು ಇಷ್ಟು ಕಿರಿದಿದ್ದರೂ ಅದು ಒಂದು ಸಮಗ್ರಭಾವವನ್ನು ಚಿತ್ರಿಸುತ್ತದೆ. ಅದರ ಸವಿಯನ್ನೆಲ್ಲಾ ಆಸ್ವಾದಿಸಬೇಕಾದರೆ, ಕವಿಯ ಕಲ್ಪನೆಯೊಂದಿಗೆ ನಮ್ಮ ಕಲ್ಪನೆಯನ್ನೂ ಹಾರಬಿಟ್ಟು, ಚಿತ್ರದ ಸುತ್ತಲೂ ಒಂದು ಉಚಿತವಾದ ಆವರಣವನ್ನು ಕಲ್ಪಿಸಿಕೊಂಡು, ಅದರ ಪ್ರಭೆಯನ್ನು ಕವಿಯ ಮಾತುಗಳ ಮೇಲೆ ಬೀರಬೇಕು ”

—‘ ಒಲುಮೆ ’ಯ ಮುನ್ನುಡಿಯಿಂದ.

೧೫ನೆಯ ಪುಟಾಣಿಗೆ ಈ ವಿವರಣೆ ಅವಶ್ಯಕ: ಇದು ಸಂಕ್ಷಿಪ್ತಸುಂದರಕಾಂಡ. ೧. ನೆಲ. ೨. ನೀರು. ೩ ಬೆಂಕಿ. ೪: ಗಾಳಿ. ೫. ಆಕಾಶ.

## ವಿವರ

## ಪ್ರವೇಶ

ಸಖನೆ ನಾಲ್ಮೊಗನೇ ! ನಿನಗೆ ಬಯಕೆ ತೀರುವನ್ನಕ
ಇತರ ಪಾಪಫಲಗಳನ್ನೆ ಹಣೆಯ ತುಂಬ ಬರೆ, ಬರೆ.
ಅರಸಿಕರಿಗೆ ಕವಿತೆಯೊರೆವ ಪಾಪಫಲವಿದೊಂದ—ಓ !
ಬರೆಯಬೇಡ, ಬರೆಯಬೇಡ, ಬರೆಯಬೇಡ, ಬೇಡವೊ !

೨

ಗೋಳುಮುಖದಿಂದಲ್ಲ
ಮುಕ್ತಿಯನು ಗೆಲುವುದು ವಿರಕ್ತಿ.
ಅಮರಪದಕಿದಿರಲ್ಲ
ಪರಿಹಾಸಕಥೆಯೊಳಾಸಕ್ತಿ.

೩

ದ್ರಾಕ್ಷೆಯ ಮುಖ ಸಪ್ಪಗಾಗಿತ್ತು, ಮತ್ತಾ
ಸಕ್ಕರೆ ಕಲ್ಲಾಗೆ ಹೋಯ್ತು ;
ಕಂಡು ಸುಭಾಷಿತರಸವ, ಸಗ್ಗಕೆ ಸುಧೆ
ಹೆದರಿಕೊಂಡೋಡಿಯೆ ಹೋಯ್ತು.

—ಸಂಸ್ಕೃತದಿಂದ.

೪

ಅರ್ತ ಮಾಡ್ಕಂಡ್ ಇಂಗಲ್ ಇಂಗೆ
ಅನ್ನೋರ್ ಮಾತು ಗಂಗೆ !
ಅರ್ತ್ ಆಗ್ದಿದ್ರು ಸಿಕ್ದಂಗ್ ಅನ್ನಾದ್
ಚಂದ್ರನ್ ಮುಕ್ ಉಗಿದಂಗೆ !

—ನನ್ನದು.

# ಸಂಸ್ಕೃತದಿಂದ

೫

ಏ ಗಣಪ! '' ಏನಮ್ಮ ?'' ' ಏಕಳುವೆ?'' ಕಿವಿಯೆಳೆವನೀ ಷಣ್ಮುಖ '
' ಸ್ಕಂದ! ಏಕೀ ಚೇಷ್ಟೆ ?'' ಅವನೆ ಮೊದಲೆನ್ನ ಕಂಗಳನೆಣಿಸಿದ.'
' ಉಚಿತವಲ್ಲೀ ನಡತೆ ಗಜಮುಖನೆ '' ಮೊದಲೆನ್ನ ಮೂಗನಳೆದ.'
ಇದಕೇನು ತೋಚದೆಯೆ ನಸುನಕ್ಕ ಶಿವೆಯೆಮ್ಮ ಕಾಪಾಡಲಿ.

೬

ಕತ್ತಿ ಕೇಳ್ವೈ ವಸ್ತ್ರಭಾರವ
ಹೊತ್ತು ಹೀನಾನ್ನಗಳ ತಿನಲೀ-
ಕತ್ತ ರಾಜಾಶ್ವಾವಸಥವನು
ಹತ್ತಿ ಸುಖದಲಿ ಕಡಲೆಗುಗ್ಗರಿಗಳನೆ ತಿನ್ನುತಿರು
ಅತ್ತಣಧಿಕಾರಿಗಳು ಬಾಲಂ-
ಬೆತ್ತುದೆಲ್ಲವು ಕುದುರೆಯೆಂದೇ
ಗೆತ್ತು ನುಡಿವರು; ರಾಜನೋ ಅವ-
ರಿತ್ತುದೇ ಪರಸತ್ಯವೆಂಬ; ತಟಸ್ಥರುಳಿದವರು.

೭

" ನೀವಾರೊ ?" " ದ್ರುಹಿಣರಥಗತಿಗೆ ನಾವ್ ಸಾಧಕರ್,
ಸತ್ಯಲೋಕಾವಾಸರಮರನದಿಯುಲೆಗಳೊಳ್
ನಾವ್ ಕೇಳಿಯಾಡುವ ಮರಾಳರ್.
ತಾವಾರೊ ?" " ಧರ್ಮಪತ್ನಿಯ ರಾಸಭಿಯು ಕೂಡಿ
ರಜಕಮುನಿಯಾಶ್ರಮದೊಳಾಂ ಕರ್ಮನಿಷ್ಠನೆಂ,
ತೀರ್ಥಯಾತ್ರಾಪಹೃತತಮಸನೆಂ, ಪೂತಾಂಗ
ನಾನ್ ರಾಸಭಾಚಾರ್ಯವರ್ಯನ್."

೮

ಕತ್ತರಿಸಿದುದಕಾನು
ದುಃಖಿಸೆನು, ಸುಟ್ಟುದಕೆ,
ತಿಕ್ಕಿದುದಕೆ ;
ಹಿರಿದುಕ್ಕವೆನಗಿದುವೆ–
ಗುಲಗಂಜಿಯೊಡನೆನ್ನ
ತೂಗಿದುದಕೆ.

೯

ಪ್ರಾಚೀನ ಕವಿಗಳನ್ನೆಣಿಕೆಗೆಯ್ವಂದು
ಕಿರುವೆರಲನಿತ್ತರಾ ಕಾಲಿದಾಸಂಗೆ
ಮರುವೆರಲಿಗಿದುವರೆಗುಮವನ ಸಮರಿರದೆ
ಸಾರ್ಥವಾಯಿತ್ತದ‘ಅನಾಮಿಕಾ’ಪೆಸರು.

೧೦

ಕುವಲಯದಲಶ್ಯಾಮೆಯೆನ್ನಂ
ವಜ್ಜಿಕೆಯನರಿಯದೆಯೆ ದಂಡಿ
‘ತಾನ್ ಸರಸ್ವತಿ ಸರ್ವಶುಕ್ಲಾ’
ಎಂದೆಂದ ನುಡಿಯದೆ ವೃಥೋಕ್ತಂ.

೧೧

“ಭಾರತವ, ಮೇಣ್ ಕಡಲನು,
ಮತ್ತು, ವರ್ಣಿಸು ಕಬ್ಬನು.”
“ತೆಕೊ, ಒಂದೆ ಪಾದ, ಸಾಕು:
ರಸದುದಯ ಪ್ರತಿಪರ್ವಕು.”

೧೨

ರಾತ್ರಿಯಲಿ ಜಾನು,
ಹಗಲಿನಲಿ ಭಾನು,
ಇದರೆರಡು ಸಂಧಿಗೆ ಕೃಶಾನು ;
ಇಂತೆನ್ನ ಶೀತ
ಇವರಿಂದ ನೀತ
ಆಗಿರಲು ಬೆಚ್ಚನ್ನೆ ನಾನು.

೧೩

ಕಮಲೆ ಮಲಗುವಳು ಕಮಲದಲಿ ;
ಹರ ಮಲಗುವನು ಹಿಮಾಲಯದಲ್ಲಿ ;
ಹರಿ ಮಲಗುವನಾ ಹಾಲ್ಗಡಲಲ್ಲಿ ;
ಏಕೆನೆ—ತಗಣೆಯ ಶಂಕೆಯಲಿ !

೧೪

ಬೇಡಬಂದವರಿತ್ತ ಕಟ್ಟುವರು ಕಟ್ಟುವರು
ಓದುವರು ಓದುವರು ಸ್ತುತಿಸಹಸ್ರಗಳ.
ಜಿಪುಣನಾದರೊ ಅತ್ತಲದನೆ ಮರುಮಾತಿನಲಿ
ಸಲಿಸಿ ಮುಗಿದೆತ್ತುವನು ಹಸ್ತಯುಗಳಗಳ.

೧೫

ನಾಲ್ಕರ ಮಗ ಐದಕೆ ಹೋಗಿ
ಬಳಿಕೊಂದರ ಮಗಳನು ಕಂಡು
ಅಲ್ಲಾಗಲೆ ಮೂರನು ಮಡಗಿ
ಎರಡನೆಯದ ನೆಗೆದನು ಮತ್ತೆ.

೧೬

ಭಟ್ಟಿಯನು ಕರೆದೊಯ್ದು, ಭಾರವಿಯನೊಯ್ದು,
ಭಿಕ್ಷುವನು, ಭೀಮಸೇನನನು ತುಯ್ದು ;
ಯಮ ಬಭಾವಳಿಯನಿಂತಾಯುತಿದ್ದಾನು !
ಭುಕ್ಕುಂಡ ನಾನರಸ! ಭೂಪ ನೀನು !

೧೭

ಹುಟ್ಟುವುದು ಬೆಟ್ಟದಲಿ ಬಳ್ಳಿ ;
ಹುಟ್ಟದೈ ಬಳ್ಳಿಯಲಿ ಬೆಟ್ಟ.
ಇಂದದರ ವಿಪರೀತ
ಚಿನ್ನದಾ ಬಳ್ಳಿಯಲಿ ಬಿಟ್ಟಿತ್ತು ಬೆಟ್ಟವೆರಡು.

೧೮

‘ಇಲಿ ಹಲ್ಲಿಯಂತಿಲಿಯವೋಲ್ ಬೆಕ್ಕು ಬೆಕ್ಕಿನಂ—
ತಾ ನಾಯಿ ನಾಯೊಲಾ ಮನೆಯೊಡತಿ ; ಮತ್ತೆಮ್ಮ
ಮನೆಯೊಳಿತರರ ಪಾಡ ಹೇಳಲೇನು !’
—ಎಂದಡಿಗೆಯೊಲೆ ಉಸಿರ ತೊರೆವ ಕಂದರ ಕಂಡು
ಮುಖಕೆ ಜೇಡರಬಲೆಯ ಮುಚ್ಚಿಕೊಂಡಳುತಿತ್ತು
ಝಿಲ್ಲೀರವವ ಚೆಲ್ಲುತೊಂದೆ ಸಮನೆ

೧೯

ಹಸಿವಿಗುಣಬಯಸಿತ್ತು ಗಣಪನಿಲಿಯನು ಹಾವು,
ಅದ ಕುಮಾರನ ನವಿಲು,
ಪಾರ್ವತಿಯ ಸಿಂಹವೋ ಗಜಮುಖನನೆ.
ಗೌರಿ ಗಂಗೆಯ ಚಂದ್ರನುರಿಗಣ್ಣ ಸಹಿಸರೀ
ಸಂಸಾರ ಸಾಕಾಗಿ
ಹಾಲಾಹಲವನೀಶನುಂ ಪೀರ್ದನಂದು.

೨೦

‘ಓದೋದಿ’. ‘ಹೊತ್ತಾಯ್ತು’. ‘ತಿಳಿಯುವುದು ಮುಂದೋದಿದಲ್ಲಿ.’
ಇಂತು ನಡೆಯಲು ಪಾಠ—ಏನ್ ಆರ್ಗೆ ಕಾಠಿನ್ಯವೆಲ್ಲಿ?

೨೧

ಕಣ್‌ಕಣ್ ಬಿಟ್ಟ ವೈದ್ಯಮಹಾಶಯ
ಉರಿಯುವ ಚಿತೆಯನು ನೋಡಿ:
“ನಾನಿರಲಿಲ್ಲ, ನಮ್ಮಣ್ಣನಿಲ್ಲ,
ಯಾವನದೀ ಕೈವಾಡ!”

## ಕನ್ನಡ ಕವಿಗಳಿಂದ

೨೨ (ಶಾಸನ)

ಶ್ರೀ ತನ್ನೆಂದಿನ ರೂಪೆ ಕೌಸ್ತುಭದೊಳಚ್ಚೊತ್ತಿರ್ದವೊಲ್ ತೋಱೆ ಕಂ
ಡೇತರ್ಕೀಕೆ ಮದೀಯ ವಾಸಗೃಹಮಂ ತಾಂ ಪೊಕ್ಕಳೆಂದೇವದಿಂ
ದಾ ತಾಮ್ರಾಕ್ಷಿಯನೀಕ್ಷಿಸುತ್ತುಮಿರೆ ತನ್ಮುಗ್ಧತ್ವಮಂ ಕಂಡು ಸಂ
ಜಾತಾಂತಃಸ್ಮಿತನಾದ ಕೃಷ್ಣನೆಮಗೀಗಾನಂದಸಂದೋಹಮಂ

೨೩ (ಮಧುರ)

ಶ್ರೀ ಪಾದಾಂಭೋಜದೊಳ್ ಮುಂಬರಿದೆಱಗು
ತಮಳ್ದುಂಬಿಯಂತಲ್ಕಱಿಂ ನಾ
ಭೀಪೂರ್ಣಾವರ್ತದೊಳ್ ತತ್ತಳಿಸುತುಮೆಳ
ಮೀನಂತೆ ವಕ್ತ್ರೇಂದುವಂ ಸಾ
ರ್ದಾರ್ವೊಱ್ತುಂ ನರ್ತನಂಗೆಯ್ದುದು ಚಟುಳ
ಚಕೋರಾಳಿಯಂತೆನ್ನನೇತ್ರಂ
ಬಾಪಿನ್ನೆಂತಪ್ಪ ಲಾವಣ್ಯದ ತವನಿಧಿಯೋ
ನಿನ್ನ ಮೆಯ್ ಗೋಮಟೇಶಾ

೨೪ (ಮಧುರ)

ಆದಿಕವಿ ಪಂಪನೆಂದನು
ವಾದಿಸಿ ವಾದಿಸಿ ವಿರೋಧಿ ವಿಪರೀತತೆಯಿಂ
ದೋದೆ ವಿಲೋಮದೆ ಪೆಸರಂ
ಮೇದಿನಿಯೊಳಗವನ ಪೆಸರೆ ಪೆಸರ್ವಡೆದೆಸೆಗುಂ

**೨೫** (ಮಧುರ)

ಪೆಸರೆಸಕದ ಪಾಲಯ್ಯಂ
ಪೊಸತೇನೆಱೆದುಂಬುದಂಬಿಲಂ ಗಡಮೆಂಬೀ
ಗಸಣಿಯೊಳೊಂದದೆ ನೆಗೞ್ದೊ
ಳ್ಪೆಸರುಂ ಮಧುರಂ ದಲವನ ಮಾತುಂ ಮಧುರಂ

**೨೬** (ಮಧುರ)

ಕವಿ ಮಧುರನ ಮಾತುಗಳೇಂ
ಸವಿಯೊ ಮದಪ್ಲವಕೆ ಮೊಱೆವ ಮಱಿದುಂಬಿಗಳಂ
ತವೆ ತೊಲಗಿಸಿ ತನ್ನಯ ಮೊಱ
ಗಿವಿಯಿಂ ಮೊಗೆಮೊಗೆದು ಸುಮುಖನಾಸ್ವಾದಿಸುವಂ

**೨೭** (ಮಧುರ)

ಏ ಮಾತೊ ನವ್ಯಕಾವ್ಯಕ
ಲಾಮಹಿಯೊಳ್ ಬಿಡದೆ ಬೀದಿವರಿವೊಡೆ ಮೊದಲೊಳ್
ನೇಮಿಯ ನೆಮ್ಮುಗೆಯಿಲ್ಲದೊ
ಡೀ ಮತ್ತಿನ ಕವಿಮನೋರಥಂ ನಡೆದಪುದೇ

**೨೮** (ರನ್ನ)

ವಸುಧೆಯೊಳಗೊಂದು ರತ್ನಮಿ
ದೆಸೆದಿರ್ದುದು ಪಲವು ರತ್ನಮಿಲ್ಲೆಂಬಿನಮೇಂ
ಮಸುಳಿಸಿದನೊ ಬಹುರತ್ನಾ
ವಸುಂಧರಾಯೆಂಬ ವಾಕ್ಯಮಂ ಕವಿರತ್ನಂ

**೨೯** (ರನ್ನ)

ರತ್ನಪರೀಕ್ಷಕನಾಂ ಕೃತಿ
ರತ್ನಪರೀಕ್ಷಕನೆನೆಂದು ಫಣಿಪತಿಯ ಫಣಾ
ರತ್ನಮುಮಂ ರನ್ನನ ಕೃತಿ
ರತ್ನಮುಮಂ ಪೇೞ್ ಪರೀಕ್ಷಿಪಂಗೆಂಟೆರ್ದೆಯೇ

೩೦ ( ಜನ್ನ )

ಎನಿತನೊಱಲ್ದು ಪೇೞ್ವ ಕವಿಯೇವನದಂ ಪೆಸರಿಟ್ಟು ಮೆಚ್ಚ ಬ
ಲ್ಲನನಱಸಲ್ಕೆ ಪೇೞ್ವುದವನಂ ಜಗದೊಳ್ ಪಡೆಯಲ್ಕೆ ಬಾರದಾ
ತನ ಮುಖದಿಂದಮಲ್ಲದದು ಸಲ್ಲದು ಕಟ್ಟಿಯುಮೇನೊ ಮಾಲೆಗಾ
ಱನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೇ

೩೧ (ಚಾಂಡರಸ)

ದೊರಕಿದ ಶಬ್ದದಿಂ ನೆಗೞ್ದ ಕಾವ್ಯಮನೆನ್ನಱವಂತು ಪೇೞ್ದೆನಾ
ದರಿಸಿ ಸಮಂತು ತಿರ್ದುಗೆ ಬುಧರ್ ಸವವರ್ಧಕಿ ಗೇಹಮಾತ್ರಮಂ
ನಿರವಿಸಲಂತದರ್ಕೆ ಪರಿಶೋಭೆಯನಗ್ಗಳಮಪ್ಪಿನಂ ನಿರಂ
ತರಮೆಸಗಲ್ಕೆ ಕರ್ತೃ ಪರಿಭಾವಿಸೆ ಕೇಳ್ ಯಜಮಾನನಲ್ಲವೇ

೩೨ ( ನಾಗಚಂದ್ರ )

ರಸಮಂ ನಾಲಗೆ ಕವಿತಾ
ರಸಮಂ ಕವಿ ಕುಸುಮರಸಮನಳಿಮಾಲೆ ಸುಧಾ
ರಸಮಂ ಸುರರಕ್ಷಯಸುಖ
ರಸಮಂ ಪರಮಾತ್ಮನಱವನುಱದವರಱಯರ್

೩೩ ( ಚಾಂಡರಸ )

ಸಕಲಾಂತರ್ಯಾಮಿ ಜೀವಪ್ರಕರವಿವಿಧ ಚೈತನ್ಯರೂಪಂ ಜಗದ್ವ್ಯಾ
ಪಕಭಾವಂ ವಿಷ್ಣುವೆಂದಾಗಮತತಿ ನತತಂ ಸಾರ್ವೆ ಸಂಬಂಧದಿಂ ಕೌ
ತುಕದಿಂದಾವಾವುದಂ ಬಣ್ಣಿಸಿದೊಡದು ಹರಿಸ್ತೋತ್ರಮೆಂದೀಗಳೀ ಚಿ
ತ್ರಕಥಾವಿಸ್ತಾರಮಂ ಬಣ್ಣಿಸಲೊಡರಿಸಿದೆಂ ಸತ್ಕವಿಶ್ರೇಣಿ ಮೆಚ್ಚಲ್

೩೪ ( ಜನ್ನ )

ಕೃತಿನಿರ್ಮಾಣದೊಳೇಕೆ ದುರ್ಜನಭಯಾರೇಕಂ ಪ್ರವೇಕಂಗೆ ಪಂ
ಡಿತಸಂದೋಹಶಿರಶ್ಶಿಖಂಡಿನಟನಾಂದೋಳಪ್ರದಂ ರೋಮಹ
ರ್ಷತೃಣೋತ್ಪಾದಮುದಶ್ರುಪೂರಜನಕಂ ತಾನೆಂಬಿನಂ ಪೇೞ್ದೊಡಾ
ಕೃತಿವರ್ಷಾಗಮುಲಕ್ಷ್ಮಿ ಧೂರ್ತದವಜಿಹ್ವಾಕರ್ತನಂ ಮಾಡಳೇ

**೩೫** ( ನೇಮಿ )

ಪರಿಕಿಪೊಡೆ ಪಿಶುನನಗ್ಗದ
ಹರನೊಳ್ ಪುರುಡಿಸುವನೆಂದೊಡುೞದರ ಪುರುಳೇಂ
ಕೊರಲೊಳ್ ವಿಷಮಂ ತಳೆದೊಡೆ
ಗಿರಿಶಂ ತಾಂ ತಳೆದನಲ್ತೆ ತುದಿನಾಲಗೆಯೊಳ್

**೩೬** ( ಹರಿಹರ )

ಬರೆದಾಹ ಬರೆದೆ ಭಾಪುರೆ
ಬರೆದಕ್ಕಟ ಬರೆದೆ ಲೇಸು ಬರೆದೆಯೆನುತ್ತುಂ
ಬಱದೆ ತಲೆದೂಗುವುದಱಂ
ಬಱದಪ್ಪುದು ಕಾವ್ಯಮಱಯದರ ಜಾಣಿಂದಂ

**೩೭** ( ರತ್ನಾಕರ )

ಅಯ್ಯಯ್ಯ ಚೆನ್ನಾದುದೆನೆ ಕನ್ನಡಿಗರು
ಅಯ್ಯಾ ಮಂಚಿದಿಯೆನೆ ತೆಲುಗಾ
ಅಯ್ಯಯ್ಯ ಎಂಚ ಪೊರ್ಲಾಂಡೆಂದು ತುಳುವರು
ಮೆಯ್ಯುಬ್ಬಿ ಕೇಳಬೇಕಣ್ಣಾ

**೩೮** ( ನೇಮಿಚಂದ್ರ )

ಪೂಸುವ ಬೂದಿಗಂಗಭವನಂ ಭವಸಾರನನಾರ್ದು ಸುಟ್ಟ ಭೂ
ತೇಶನ ಬುದ್ಧಿಗುದ್ದವಱದಾಂ ಪೊಗೞೆಂ ಪೊಗೞ್ವೆಂ ಮನೋಜನಂ
ಕೇಸುರಿಯಂತೆ ಪರ್ಬಿ ಪಟುವಾಗಿ ಪೊದಲ್ದಳುರ್ದಂತರಂಗಮಂ
ಕಾಸಿ ಕಪಾಲಿಯಂ ಪಿಡಿದೊಱಲ್ದರೆವೆಣ್ಣನೆ ಮಾಡಿಬಿಟ್ಟನಂ

**೩೯** ( ಷಡಕ್ಷರಿ )

ಕಿರಿಯ ಕೃತಿ ಪಿರಿದೆನಿಕ್ಕುಂ
ಪೆರರರ್ಥಕೆ ಕೈದುಡುಂಕದಿರೆ ಸತ್ಕವಿಗಂ
ಕಿರಿಯ ಸಿರಿ ಪಿರಿದೆನಿಕ್ಕುಂ
ಪೆರರರ್ಥಕೆ ಕೈದುಡುಂಕದಿರೆ ಮನುಜಂಗಂ

೪೦ ( ಷಡಕ್ಷರಿ )

ಪರಪರಿವಾದವಂ ನೆಗಳ್ವುದೇ ಜಪಮನ್ಯಮನಃಪ್ರಸೂನಮಂ
ಕೊರಗಿಪುದೇ ತಪಂ ಪೆಱರ ಜೀವಿತಮಂ ಪರಿದಿಕ್ಕುವಂದಮೇ
ಪರತರಶೀಲಮಾದರಿಸಿ ಲೋಗರ ಮರ್ಮಮನೈದೆ ಭೇದಿಪೊಂ
ದಿರವೆ ಪೊದಳ್ದ ಜ್ಞಾನಮೆನೆ ದುರ್ಜನತಾಪಸನೇಂ ಕೃತಾರ್ಥನೋ

೪೧ ( ನೇಮಿ )

ಆನುಂ ಬುಧರೊಡನೆ ನೃಪಾ
ಸ್ಥಾನದೊಳಿರ್ದಪ್ಪೆನೆಂದು ಕುಕವಿಕದಂಬಂ
ಬಾನುದ್ದಮುಪ್ಪದೇಕು
ದ್ಯಾನದೊಳೊಡನಿರವೆ ಕಾಗೆಯುಂ ಕೋಗಿಲೆಯುಂ

೪೨ ( ಚಾವುಂಡರಸ )

ಬಿರುದಂ ಲೋಕವಿರುದ್ಧಮಂ ಕೃತಿಯೊಳುಂತೇಕಾರಣಂ ಪೇೞ್ದು ಕೊ
ಳ್ವರೊ ನಲ್ಲಕ್ಷಣಮಾಗಿ ಪೇೞ್ದ ಕೃತಿಯಂ ಕೇಳ್ದರ್ ಮನಂಗೊಂಡಿದ
ಚ್ಚರಿಯಾಯ್ತೆಂಬರಗಲ್ಕೆಮಾಡುವರುದಾಸೀನರ್ ರಸೋಕ್ತಂ ರಸೇ
ತರಮೆಂದಂದಿವು ತಾವೆ ಪೇೞವೆ ವೃಥಾಸಂರಂಭಮೇಗೆಯ್ವುದೋ

೪೩ (ಷಡಕ್ಷರಿ)

ಸಲೆ ಸತ್ಕೃತಿಯೊಳ್ ದೋಷಮ
ನಲಸದೆ ನಡೆ ನೋಡಿ ನೋಡಿ ಕಾಣದೆ ಮನದೊಳ್
ಮಲಮಲನೆ ಮರುಗುವೀ ಕೋ
ಟಲೆಯಿಂ ಖಳನೆಂತು ಬರ್ದುಕುವಂ ಭೂತಲದೊಳ್
ಅದರಿಂ ದೋಷಾಭಾಸಮ
ನೊದವಿಪರೊಂದೆಡೆಗೆ ದುರ್ಜನಸ್ತುಷ್ಯತು ಎಂ
ಬುದನನುಕರಿಸಿ ಕವೀಂದ್ರರ್
ಪದಪಿಂ ಕೃತಿಯೊಳ್ ಪರೋಪಕೃತಿ ಪರತಂತ್ರರ್

೪೪ (ನೇಮಿಚಂದ್ರ)

ಕುಡುವವನೇನನಿತ್ತಪನೊ ಕಟ್ಟೆ ಬುಧಾಳಿಗೆ ಪೊನ್ನ ಮೊಟ್ಟೆಯಂ
ಕುಡುವೊಡೆ ಚೆಚ್ಚರಂ ಕುಡುವುದುಳ್ಳುದನಂತದು ತೀರಿದಂದು ಕೈ
ಯುಡುಗದೆ ತಂಬುಲಂಗುಡುವುದಂತದು ತೀರಿದೊಡಂ ಪ್ರಭುತ್ವದೊಳ್
ತೊಡರ್ದಿರದಾಱೆ ಕೂಱೆ ನಯದಿಂ ವಿನಯಂಗೆಯಲೇನೊ ತೀರದೇ

೪೫ (ನೇಮಿಚಂದ್ರ)

ಬೆಲೆಯಿಂದಕ್ಕುಮೆ ಕೃತಿ ಗಾ
ವಿಲ ಭುವನದ ಭಾಗ್ಯದಿಂದಮಕ್ಕುಂ ನೋಳ್ಪಂ
ಬೆಲೆಗೊಟ್ಟು ತಾರ ಮಧುವಂ
ಮಲಯಾನಿಲನಂ ಮನೋಜನಂ ಕೌಮುದಿಯಂ

೪೬ (ನೇಮಿಚಂದ್ರ)

ವದನಂ ಚಂದ್ರಪ್ರಭಂ ವಿಕ್ರಮಭುಜಮಜಿತಂ ಪಾಣಿ ಪದ್ಮಪ್ರಭಂ ಸಂ
ಪದಮೆಂದುಂ ವರ್ಧಮಾನಂ ಗುಣತತಿ ವಿಮಳಂ ತನ್ನ ಪೆಂಪೊಂದನಂತಂ
ಹೃದಯಂ ಸ್ವಾಧೀನಧರ್ಮಂ ಮತಿ ಪುರುಚರಿತಂ ಶೀತಲಂ ಸುವ್ರತಂ ತಾ
ನದಱಿಂ ಪ್ರತ್ಯಕ್ಷತೀರ್ಥೇಶ್ವರನೆನೆ ನೆಗೞ್ದಂ ಪದ್ಮನಾಭಪ್ರಧಾನಂ

೪೭ (ನೇಮಿಚಂದ್ರ)

ತೊಳತೊಳಗೆ ದಿಗಂಬರಮಂ
ಬೆಳಗುವ ರುಚಿಯಿರ್ದುಮೇನೊ ಸಕಲಜನಾಂತ
ಸ್ಸ್ಥಳತಮಮುಮಂ ತಮ್ಮುದಯದೊ
ಳಳಱಿಸಿದರೆ ರವಿಗಳೆಮಗೆ ಕವಿಗಳೆ ವಂದ್ಯರ್

೪೮ (ನೇಮಿಚಂದ್ರ)

ಕುವಳಯದಲರಂ ಕೌಮುದಿ
ಯ ವಿಭವಮಂ ಕಂಡು ಕೊಂಡು ಕೊನೆವಂ ರವಿಯೋ
ಕವಿಯೋ ರವಿ ಕಾಣದುದಂ
ಕವಿ ಕಾಣ್ಬನೆನಿಪ್ಪ ವಚನಮೇಂ ತಪ್ಪುಗುಮೇ

೪೯ (ನೇಮಿಚಂದ್ರ)

ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ ವಾಮನಕ್ರಮಂ
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ ಹರನಂ ನರನೊತ್ತಿ ಗಂಟಲಂ
ಮೆಟ್ಟುಗೆ ಮೆಟ್ಟದಿರ್ಕೆ ಕವಿಗಳ್ ಕೃತಿಬಂಧದೊಳಲ್ತೆ ಕಟ್ಟದರ್
ಮುಟ್ಟದರೊತ್ತಿ ಮೆಟ್ಟದರಿದೇನಳವಗ್ಗಳಮೋ ಕವೀಂದ್ರರಾ

## 'Greek Anthology'ಯಿಂದ ಪ್ರೇರಿತವಾದುದು

೫೦

ಸುರೆಯ ಸೇವಿಸಿದವನಿಗುಚ್ಛೈಶ್ರವಸ್ಸು !
'ಬರಿಯ ನೀರೆ'ಂದವಗೆ ನರಕದ ತಮಸ್ಸು !

೫೧

ಮೀಸೆಗೆ ಕಪ್ಪನು ಹಚ್ಚುವನೆ? ಛೆ!
ನಂಬದಿರಾ ಮಾತ.
ಕೊಂಡುದೆ ಕಪ್ಪನೆ ಕೂದಲು—ಕೇಳು—
ಅಂಗಡಿಯುವನೀತ.

೫೨

ಮೂಗಯ್ಯ ಸೀಂತಾಗ
ವಜ್ರಾಯುಸೆನ್ನುವಂತಿಲ್ಲ.
ಮೂಗುಬಿಲ ಬಲುದೂರ–
ಕಿವಿಗೇನು ಕೇಳುವಂತಿಲ್ಲ.

೫೩

ಕಪ್ಪುಹೆಣ್ಣೆಂದೆನ್ನ ಬಣ್ಣಿಸಿ ನಗಬೇಡ
ವಣ್ಣ–ಕೇಳ್ ಇದ್ದಿಲು ಕಪ್ಪು.
ಕಪ್ಪು ; ಕಾವೇರಲು ಸಂಜೆ ಗುಲಾಬಿ ರಂ–
ಗುರಿಬಣ್ಣವೆನುವುದೆ ಒಪ್ಪು.

೫೪

ನಾಯಿ ಮುಖ ಮೇಲೆತ್ತಿ
ನೀಳ್ದೊದರಲಲ್ಲಾರೊ ಸತ್ತರಂತೆ !
ಮರುಮನೆಯ ಹಾರ್ಮೋನಿಯಮ್
ಆಯೆನ್ನಲಾ ನಾಯೆ ಸತ್ತಿತಂತೆ !!

೫೫

ನೆನಪು ಮರೆವುಗಳಿಬ್ಬರೂ ನಮಗಿಷ್ಟರೆ ಆವರಿಬ್ಬರೂ
ತಕ್ಕವನು ನಾವ್ ಮರೆಯದೊಲು ಕಾಪಾಡಲೆಂದೂ ನೆನಪುತಾಯ್
ತಗದುವನು ನಾವ್ ನೆನೆಯದೊಲು ಕಾಪಾಡಲೆಂದೂ ಮರೆವುತಾಯ್
ನೆನಪು ಮರೆವುಗಳಿಬ್ಬರೂ ನಮಗಿಷ್ಟರೆ ಅವರಿಬ್ಬರೂ.

೫೬

ಗುರು ಮಹಾವಾಗ್ಮಿ ;
ನಿಂತು ಮಾತಾಡಿದರೆ ಗಂಟೆ, ಕಂಚು !
ಶಿಷ್ಯರೋ—ಏಳೆ :
ಗೋಡೆ ನಾಲ್ಕರ ಜೊತೆಗೆ ಮೂರು ಬೆಂಚು !

೫೭

ರಾಮಾಯಣದಲಿ ಲಂಕೆಯ ಬೆಂಕಿಯು
ವರ್ಣಿಸಿದುದನಾ ವಾಲ್ಮೀಕಿ
ಕೇಳಿಯೆ, ಮಿಕ್ಕೊರುಗಳುರಿದುರಿದುವು
ತಡೆಯದೆ ಹೊಟ್ಟೆಯ ಉರಿ ತಾಕಿ

೫೮

ಕುರುಡನಿಗೆ ಕಣ್ಣು ಕಡ,
ಹೆಳವನಿಗೆ ಕಾಲು ಸಾಲ ;
ಇದ ಕಂಡು ಕಲಿವವರು
ಬದುಕುವರು ಪಡೆದು ಮೇಲ.

೫೯

ಗಾಯಕೆ ಕಟ್ಟಲು ಹೆಣಗಳ ಬಟ್ಟೆ
ಕಳಿಸಿದ ಮೂಟೇ ಮೂಟೇ ಕಟ್ಟಿ
ಹೆಣಗಳ ಹೊರುವಾ ಐಯ.
ಬದಲಾಗದಕೆ, ಬಂದವರ್ನೆಲ್ಲ
ಸಾಗ್‌ಹಾಕ್ತಿದ್ದ, ಬಿಡತಿರನಿಲ್ಲ
ಔಷಧಿ ಕೊಡುವಾ ರಾಯ

೬೦

ಈ ಇವನು ಕಲ್‌ತುಂಬ ಕಡೆದ,
ಮನೆತುಂಬ ಮಕ್ಕಳನು ಪಡೆದ.
ಒಂದರಲು ಅವನ ಕೈ ಕಾಣೆ
ಕಂಡರೆನ್ನಾಣೆ.

೬೧

ಹೂತ ಹೊನ್ನನು ಕಂಡು
ಇವ ಬಿಸುಟ ತಂದ ನೇಣ.
ಹೋದ ಹೊನ್ನನು ಕಂಡು
ಅವ ಕೊಂಡನದುವೆ ನೇಣ.

೬೨

ಎನ್ನಿನಿಯನಲ್ಲದಿಂತೆನ್ನ ಕಂಡವರಿಲ್ಲ
ಎಂದಳಾ ಬೇಲೂರ ಮುಕುರಧಾರಿ:
ಜಾತರೂಪದೊಳೆನ್ನನಿಂತಿಲ್ಲಿ ನಿಲಿಸಿದನೆ—
ಆವಾಗ ಕಂಡನೀ ರೂಪಕಾರಿ?

## ಸಂಕೀರ್ಣ

### ೬೩

ಚಿರಕಾಲ ನೂಲ್ಪಟ್ಟು ಪ್ರಕೃತಿ ಕಡೆಗೊಬ್ಬ
ಹೋಮರನ ಪಡೆದಳಾಯ್ತುದುವೆ ಕಡೆ ಗಬ್ಬ!

### ೬೪

ಏಳು ಗ್ರೀಕರ ಮಹಾನಗರಕ್ಕೆ ಮೇಲಾಟ—
ಮರೆದಿರಲು ಹೋಮರನು ಸತ್ತು!
ಬದುಕಿದ್ದ ಹೊತ್ತಿನೊಳಗದೆ ನಗರಗಳಲವನು
ಬೇಡುತಿದ್ದನು ತುತ್ತು ತುತ್ತು!

— ಗ್ರೀಕಿನಿಂದ, ಇಂಗ್ಲಿಷು ಮೂಲಕ

### ೬೫

'ಇತ್ತ ಮಾತನು ಸಲಿಸದವ ನೀ
ಕತ್ತೆಮಗ'ನೆಂದೊಬ್ಬನೊಬ್ಬನ ಬೈಯುವದ ಕೇಳಿ
'ಹೆತ್ತೆನೇ ನಾನಿಂತ ಮಗನ'ನೆ-
ನುತ್ತೆ ಕತ್ತೆಯುಮತ್ತುದೈ ಧೃತರಾಷ್ಟ್ರ ಕೇಳೆಂದ

— ತೆಲುಗಿನಿಂದ

### ೬೬

ಏನು ವಿಶ್ವಾಮಿತ್ರ! ಸಮ್ರಾಜಪುತ್ರ!
ಋಷಿ ವಸಿಷ್ಠನಿಗಿದ್ದುದೊಂದು ಹಸು ಮಾತ್ರ!
ಅದಕೆ ಕಣ್ಣಿಟ್ಟು ನೀನೆತ್ತಿಕೊಂಡ
ಕಾಳೆಗವ ನುಂಗಿತಾ ಬ್ರಹ್ಮದಂಡ!
ಹೆಣ್ಣುಹಸುವೊಂದಕೋಸುಗ ಕ್ಷಾತ್ರ ತಾಳಿ
ನಡೆದೆಯೇ! ನಿನಗೇನು ಬಂದಿತ್ತೊ, ಗೂಳಿ!

—ಜರ್ಮನ್ ಕವಿ ಹಯನೆಯಿಂದ ಭಿನ್ನ

೬೭

ನಯ ನುಡಿಯಬೇಕೆ?
ಈ ಮೃಗಗಣಕ್ಕೆ?
ಬಳಸುವರೆ ರೇಷ್ಮೆನೂಲ
ಹೊಲಿಯಲಿಕೆ ಗೋಣಿಚೀಲ?

೬೮

" ಕಂಡವರ ಕಾಲ ಬಳಿ ನಾ ಕಲಿಯಲಿಲ್ಲ.
ಗುರು ಸ್ವಯಂಬುದ್ಧಿ." " ಓ, ಅದಕೆ ಹೀಗೆಲ್ಲ! "

೬೯

ಹೊನ್ನು ಹೋದರೆ–ಏನೊ ಹೋಯಿತು.
ಬುದ್ಧಿಶಕ್ತಿಯ ಬಳಸಲಾ–ಇನ್ನಷ್ಟು ಹೊನ್ನನು ಗಳಿಸಲಾ!

ಹೆಸರು ಹೋದರೆ–ಬಹಳ ಹೋಯಿತು.
ಹೊಸತು ಕೀರ್ತಿಯ ಕೂಡಿಸು–ಅಪಕೀರ್ತಿ ಬಂದುದನೋಡಿಸು.

ಧೈರ್ಯ ಹೋದರೆ–ಎಲ್ಲ ಹೋಯಿತು.
ಹುಟ್ಟಿ ಸೀ ಬರದಿದ್ದರೂ–ಚೆನ್ನಾಗುತಿತ್ತಿರದಿದ್ದರೂ.

—ಜರ್ಮನ್ ಕವಿ ಗಯಟೆಯಿಂದ, ಇಂಗ್ಲಿಷು ಮೂಲಕ.

# ನನ್ನವೇ ಕೆಲವು, ಹಳೆಯವು

೭೦

ಓಲೆಯುಟ್ಟಿದಳಂದು ಕುವರಿ ಸಂಯುಕ್ತೆ
ವೀರ ಪೃಥ್ವೀರಾಜ ಪರಿಣಯಾಸಕ್ತೆ :
'ಬರುವೆನೆಂದೆಂಬೆಯಾ—ಅರಲೊಂದ ಕಳುಹು
ಬಾರೆನೆಂದೆಂಬೆಯಾ—ಸರಲೊಂದ ಕಳುಹು.'

೭೧

ಅಡುಗೆಯ ಮನೆಯಲಿ ಗೋಡೆಯಲಿ
ತೂಗಿದ ಬಿದಿರಿನ ಗೂಡೆಯಲಿ
ಸರಸರವಾಗಿದೆ ಕೋಡುಬಳೆ!
ನೋಡುತ ಕುಳಿತಿದೆ ಗೋಡೆಮೊಳೆ!

೭೨

ಬೆಟ್ಟದ ಮೇಲಿನ ಭಟ್ಟನ ಹೊಟ್ಟೆ
ಹಿಂದಕೆ ಹೋಗದು ಮುಟ್ಟಿದರೆ
ಅವನ ಗುಡಾಣದ ಡೊಳ್ಳಿನ ಹೊಟ್ಟೆ
ಖಣಿಖಣಿ ಎನುವುದು ಕುಟ್ಟಿದರೆ

೭೩

ಜನರು ಕರ್ಣಾಟಕದವರು ಬಲು
ಘನರು ದಾನದ ದೃಢದ ಪದ್ಮಾ
ಸನರು ಪರಹಿತಕಾಗಿ ಜೀವವ ತೇದು ವಾಮನರು
ವಿನಯದಿಂದೈತರಲಿ ಮೇಣ್ ಕಡು
ಮುನಿಸಿನಿಂದಲೆ ಬರಲಿ ಕರೆದೊಳ
ಮನೆಯ ಸರುವಸ್ವವನು ಸುರಿವರು ಕರ್ಣನಾಟಕರು

**೭೪**

ಕಾಗೆಯತ್ತರದೇ ಸದ್ದು: ಕಾ! ಕಾ! ಕಾ!
ಕಾಗೆ ನಕ್ಕರದೇ ಸದ್ದು: ಕಾ! ಕಾ! ಕಾ!
ಆದರದಕೆ ಬಹಳ ಜಂಬ! ತಲೆಯೆ ನಿಲ್ಲದು!
ತನಗೆ ಮಾತು ಬಾರದೆನಲು ಕೇಳವೊಲ್ಲದು!

**೭೫**

ತಿತಿ ಮಾಡ್ನೋರ್ಗ್ ಏನ್ ಗೊತ್ತೈತೊ
ಚಡ್ಡೀ ವೊಲಿಯೊ ಕೆಲಸ?
ಓದ್ನೊ ಐಗೋಳ್ ಕಟ್ನ್ಕೋಂತಾರ
ಸೂಳೇ ಕಾಲಿನ್ ಗೊಲಸ?

**೭೬**

ಕಾಲಿ ನೀರ್ನ ಯೆಂಡ ಮಾಡ್ದ್ರೆ
ಯೇಸು ಕಿಸ್ತ ಪಬ್ರು—
ಪಕ್ಕಾ ಯೆಂಡಾನ್ ನೀರ್ ಮಾಡಾದು
ನಂ ಮುನ್ಸ್ಯದ್ದು ಜಬ್ರು!

**೭೭**

ಕಂಡೋರ್ ಹೆಣ್ತೀನ್ ಹುಡುಕೋರ್ಗಿರೊ
ನರಕ ತಿನ್ಲಿ ರಕ್ಕರ್!
ಇಲ್ದೋಳ್ಗ್ ಅಲಿಯೊ ಸಂಭ್ರಂದಲ್ಲಿ
ಇರೋಳ್ ಕೊಟ್ಟ್ಬಾಳ್ ಚಕ್ಕರ್!

**೭೮**

ಮಾತ್ ಇರಬೇಕು—ಮಿಂಚ್ ಒಳದಂಗೆ!
ಕೇಳ್ದೋರ್ 'ಹ್ಹಾ' ಅನ್‌ಬೇಕು!
ಸೋನೆ ಸುರದ್ರೆ ಉಗದ್ ಅಂದಾರು:
'ಮುಚ್ಕೊಂಡ್ ಓಗೊ, ಸಾಕು!"

೭೯

ಯೆಂಗಿಸ್ರ್ ಔರೆ ಊವಿದ್ದಂಗೆ-
    ನಲುಗಿಸ್‌ಬಾರ್ದುರ್ ಅವರ್‍ನ !
ಒಂದ್ ಚೋಟುದ್ದ ಊವಂತ್ ಅದನ
ಒದ್ರ್ದೋನ್ ಇಂದ್ರ ಉದ್ದಾರ್ ಆದ್ನ ?
ಯೆಂಗಿಸ್ರ್ ಔರೆ ಊವಿದ್ದಂಗೆ-
    ನಲುಗಿಸ್ ಬಾರ್ದುರ್ ಅವರ್‍ನ !

## ನನ್ನವೇ ಕೆಲವು, ಹೊಸವು.

೮೦

ಬಾಟನಿ ಜಿಯಾಲಜಿ ಸುಆಲಜಿಗಳೊಂದೆಡೆಗೆ
    ಸೇರ್ಗುರ್ಮೇ-ಸೇರ್ಗುರ್ಮಾ ಸ್ವರ್ಗದಲ್ಲಿ;
ಕಲ್ಪಗಳ ಚಿಂತೆಗಳ ಕಾಮಗಳ ಕಳಕೊಂಡು
    ಮೇಣೆಮ್ಮ ಸೈನ್ಸುಕಾಲೇಜುಗಳಲಿ.

೮೧

ಇವ ತನ್ನ ಬೈದನಲ! ತಾನವನ ಬೈದ!
ಹಿರಿಯನಿವರೊಳಗಾರು ? ಯಾರವನು ಹೈದ ?

೮೨

    ಕವಿ ಬೋಳುತಲೆಯುವನು
    ಬಂತು ಪದಕ, ಪವನು
ಹೊಗಳಿದರು, ಹಾಡಿದರು, ಹುಚ್ಚು ಹಿಡಿಸಿದರು.
ಬಾಲಬಿಚ್ಚಲು ತೊಡಗಲಲ್ಲೆ ಮುಡಿಸಿದರು.
    ಬಂತೊಂದು ಹೊಸಮೆಚ್ಚು,
    ಮಿಕ್ಕೆಲ್ಲಕೂ ಹೆಚ್ಚು-
ಮಗುವೊಂದು ಕವಿಯಾಗಬಯಸಿದಂದು!
ಬಯಸಿ ತನ್ನೆಳೆಗುರುಳ ಕುಯಿಸಿದಂದು!

೮೩

ಹೆಗಲ ಮೇಲೆ ಹೊಳೆಯುತಿತ್ತು
ಫಳಫಳಫಳ ಬಳೆಯು ನರ!
ಬಿಸಿಲು! ಭಾರ! ಬಳಲುತಿತ್ತು
ಅಡಿಯ ಮಾಂಸ, ಮೂಳೆ, ನರ!

೮೪

ಮುಚ್ಚಿ ಹೇಳಿದನು ಕವಿ–
ಕೇಳುವರ ಬಗೆ ಮೆಚ್ಚಿಬರಲಿ ಎಂದು;
ಬಿಚ್ಚಿ ಹೇಳದೆ ಬಿಟ್ಟ–
ಕೇಳುವರ ಬಗೆ ಬೆಚ್ಚದಿರಲಿ ಎಂದು.

೮೫

ಪೂರ್ವಜನ್ಮದಲಿವನು ಜರ್ಮನನೊ ಏನೊ!
ಅಲ್ಲದಿರೆ ಕಂಡ ಕಣ್ ಕುಕ್ಕಿ ಬರಲು–
ಮಳೆಬಿಸಿಲು ಬಿಳದಂತೆ ಕಾಪಿಡುವ ಕೊಡೆಯೇನು
ಬಂದೂಕವೇ—ಹೀಗೆ ಹಿಡಿದು ಹೊರಲು?

೮೬

'ಹಸಿವೇ' ರೂಪದೊಳಡಗಿಹರೆಲ್ಲಾ–
ಹರಿ, ಸಿವ, ವೇದಾಭ್ಯಾಸಜಡ.
ದೇವರ ಪೂಜೆಗೆ ಹಲವು ದಾರಿ ಸಂ–
ಪಾದನೆ, ಕಳವು, ಭಿಕ್ಷೆ, ಕಡ.

೮೭

ತಣಿಯುಂಡು ಮಿರುಗಿದವ
'ಇರುಳ ಸಾವಿರ ಕಣ್ಣು ನಕ್ಷತ್ರ' ವೆಂದ.
ಹಿಡಿಯುಣದೆ ಸೊರಗಿದವ
'ಕೀವು ಕಾರುವ ಹುಣ್ಣು' ಎಂದದನೆ ಕೊಂದ.

೮೮

ಕಾರು ಹೋಗುವಾಗಲೆಲ್ಲ
ಮಣ್ಣು ಬಿದ್ದು ಬಾಯಿಗೆ
ನೆನಪುಕೊಡುವುದಾವು ಗೈವ
ದ್ರೋಹ ನಾಡತಾಯಿಗೆ

೮೯

ಪಾಮರರೆದುರು ಪಂಡಿತನಂತೆ
ಪಂಡಿತರೆದುರು ಪಾಮರನಂತೆ
ನಡೆವುದೆ 'ಪಾಪಂಮುಡಿರತ'ನಂತೆ!
ಮನುಷ್ಯಬಾವಲಿ ಇದುವಂತೆ!

೯೦

'ಆಷಾಢಭೂತಿ'ಗೆ ಮಕ್ಕಳು ಮೂವರೆ:
'ಸಮಯಾನುಸಾರಿ'ಯೆ ಹಿರಿಯ;
'ದಾಸಾನುದಾಸ' ಮೇಣ್ 'ಅತಿವಿನೀತ'ರುಗಳೆ
ಅವಳಿಜವಳಿಗಳು ಕಿರಿಯ

೯೧

'ಕುಳ್ಳು ಕುಂಬಳ' ಹೆಸರಿಗುರಿಯಿತು
ಡೊಳ್ಳುರಾಯರ ಗಾಯವು.
'ಕುಬ್ಜಕೂಷ್ಮಾಂಡ'ಕ್ಕೆ ಹಿರಿಹಿರಿ
ಹಿಗ್ಗಿತೇನೀ ಮಾಯವು!

೯೨

'ಪೈಶುನ್ಯಜಿಹ್ವ'ನಿವ! 'ಕಾಂಸ್ಯಕರ್ಣ'ನಿವ!
ಕಲ್ಪಿಸುವರಜನಿಗೂ ಹೊಳೆಯದವಗುಣವ!

೯೩

ಪಿತ 'ಶೂನ್ಯಶೀರ್ಷ' ! 'ಮೃತಬುದ್ಧಿ' ಮಾತೆ !
'ನೀತಾತ್ಮಕ'ರ್ ನಾವು–ಜ್ಞಾತ ಮೇಣ್ ಜಾತೆ !

೯೪

ಇದು ಭಾರಿ ಸೀರೆ !
ಇದ ಕೊಳಲು ಕೊಟ್ಟವರು–ಒಂದೆ ? ನೂರೆ ?
ಚೌಕಸಿಗೆ ಬಲಿಯಾಗಿ
ಕಾಸುಕಾಸನು ನೀಗಿ
ಇದ ಕೊಳಲು ಕೊಟ್ಟಿತೀ ಊರಿಗೂರೆ !

೯೫

ಹರ ಮಾರಾರಿ !
ಹರಿಯೊ ಮುರಾರಿ !
ಹರಿಹರರ್ಗೇಕೀ ಮಾರಾಮಾರಿ ?
ಹರಿ ಮನ್ಮಥನಾ ?
ಹರ ಮುರ ? ಹತನಾ ?
ಹರಿಹರರ್ಗೇಕೀ ವೈರದ ಕಥನ ?

೯೬

ವಿದ್ಯೆ ಕಲಿಯುವುದೇಕೆ ?
ಹೊಟ್ಟೆಗೆ ? ಬಟ್ಟೆಗೆ ?
ಮೇಣ್ ತನ್ನ, ತನ್ನವರ ಮೆರೆಸುತಿರುವುದಕೆ ?
ಅದೆ, ಕೇಳು, ಕಡೆಯಲ್ಲ ;
ತನ್ನದೊಂದೇ ಅಲ್ಲ ;
ತಾ ಕಂಡವರ ಹೊಟ್ಟೆ ಉರಿಸದಿರುವುದಕೆ !

೯೭

ತಿಂಗ್ಳ ಪಗರು ಬರುವನಕ
'ಮುತ್ತು' ಬಂದಿರಲಿಲ್ಲ ನಮ್ಮವರಿಗೆ
ಇಂದು ಮುತ್ತೋ ಮುತ್ತು
ಸರ್ವರಿಗು ಹಳ್ಳಿಯಿಂ ದಿಳ್ಳಿವರೆಗೆ

೯೮

'ಗಾಜುಗೊಂಬೆಯು ಮಗು ಮುರಿದುಗಿರಿದೀತು!
ಬೆಲೆ ಹೆಚ್ಚು! ನೂರು ರೂಪಾಯಿ!
ಮಗುವನೆಲ್ಲಾದರೂ ಕರೆದೊಯ್ಯೊ! ಹೋಗೋ!
ಎಂದಾಳ ಗದರಿದಳು ತಾಯಿ!

೯೯

ಹೊರಗೆ ಹೊರಟಿತು ಗಂಡು   ಸಿನಿಮ ಹೋಟೆಲು ಬಿಲ್ಲು
ಮೂರುವರೆ ರೂಪಾಯಿ—ಮೂವರೇ ಜನಕೆ!
ಮನೆಯೊಳುಳಿಯಿತು ಹೆಣ್ಣು   ಅದಕೆ ಬೀಸುವ ಕಲ್ಲು,
ತಪ್ಪಿದರೆ ಒಲೆ, ಮುಸುರೆ, ಮೊರ, ಹಾರೆ, ಒನಕೆ!

೧೦೦

ಸಾಹಿತ್ಯಲೋಕದೊಳಗೀ ಎರಡೆ ಜಾತಿ:
ಹಣ್ ಹೆರುವ ಮರನೆ ಕವಿ, ವಾಚಕನೆ ಪಾತಿ

ಬಿ. ಬಿ. ಡಿ. ಪವರ್ ಪ್ರೆಸ್, ಅರಳೇಪೇಟೆ, ಬೆಂಗಳೂರು ನಗರ